ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ನಂಜನಗೂಡು ಪಟ್ಟಣದ ಸರ್ಕಾರಿ ಬಾಲಕರ ಪ್ರೌಢ ಶಾಲೆಯ ಪುನರ್ ನಿರ್ಮಾಣ ಕುರಿತು

ಶ್ರೀ ಎಸ್.ನಾಗರಾಜ್ (ಸಂದೇಶನಾಗರಾಜ್) (ಸ್ಥಳೀಯಸಂಸ್ಥೆಗಳಕ್ಷೇತ್ರ)

471 (484) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ನಂಜನಗೂಡು ಪಟ್ಟಣದ ರಾಷ್ಟ್ರಪತಿ ರಸ್ತೆಯಲ್ಲಿರುವ 77 ವರ್ಷಗಳ ಹಳೆಯದಾದ ಸರ್ಕಾರಿ ಬಾಲಕರ ಪ್ರೌಢ ಶಾಲೆಯನ್ನು ಜೀರ್ಣೋದ್ಧಾರ ಮಾಡಿ ಪುನರ್ ನಿರ್ಮಾಣ ಕ್ರಮ ಜರುಗಿಸಲಾಗುವುದೇ ;

(ಆ) ಈ ಶಾಲೆಗೆ ಇತ್ತೀಚೆಗೆ ಕಿಡಿಗೇಡಿಗಳು ಬೆಂಕಿ ಹಚ್ಚಿದ ದಾಖಲೆಗಳು ಸುಟ್ಟು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ದಾಖಲೆಗಳನ್ನುಪುನರ್ ಸೃಷ್ಠಿಸಲು ಕ್ರಮ ತೆಗೆದುಕೊಳ್ಳಲಾಗಿದೆಯೇ; ಶಾಲಾ ಆವರಣವನ್ನು ಬೇರೆಯವರು ಪ್ರವೇಶಿಸದಂತೆ ಬಿಗಿಗೊಳಿಸಲಾಗುವುದೇ ;

(ಇ) ಶತಮಾನ ದಾಟಿರುವ ನಂಜನಗೂಡು ರಥ ಬೀದಿಯಲ್ಲಿರುವ ದಳವಾಯಿ ಹಿರಿಯ ಪ್ರಾಥಮಿಕ ಶಾಲೆಗೆ ಹೊಂದಿಕೊಂಡಂತಿರುವ ಬೃಹತ್ ವಿದ್ಯುತ್ ಟ್ರಾನ್ಸ್‌ಫಾರ್ಮರನ್ನು ಸ್ಥಳಾಂತರಿಸಲು ಶಾಲೆಯ ಆವರಣವನ್ನು ಸ್ವಚ್ಛವಾಗಿಡಲು ಶಾಲೆಗೆ ಸುಣ್ಣಬಣ್ಣ ಮಾಡಿಸಲು ಕ್ರಮ ಜರುಗಿಸಲಾಗುವು ದೇ ?